# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 353
ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 18.07.2019
ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಪ್ರಶ್ನೆ | ಉತ್ತರ |
| --- | --- |
| ಅ) ಸರ್ಕಾರಿ ಸುತ್ತೋಲೆ ಸಂಖ್ಯೆ ಕಾಇ: 58 ಎಲ್‌ಡಬ್ಲೂಎ ದಿನಾಂಕ: 13-10-2016 ರ ಉಪಧನ ಪಾವತಿ ಕಾಯ್ದೆ 1972 ರಡಿ ಕಲಂ 2(ಇ) ಪ್ರಕಾರ ರಾಜ್ಯ ಸರ್ಕಾರದ ದಿನಗೂಲಿ ನೌಕರರಿಗೆ ಕಲಂ 4(1)ರ ಪ್ರಕಾರ 5 ವರ್ಷಗಳ ನಿರಂತರ ಸೇವೆಯನ್ನು ಸಲ್ಲಿಸಿ ಹೊರಬಂದ ನೌಕರರಿಗೆ ಉಪಧನ ಪಾವತಿಯನ್ನು ಮಾಡುವಂತೆ ಆದೇಶಿಸಿರುವುದು ನಿಜವೇ: | ಹೌದು |
| ಆ) ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ:146: ಸೇಸ್ನಾಅ 2015, ದಿನಾಂಕ: 16.05.2019 ರಲ್ಲಿ ಹೊರಡಿಸಿರುವ ಅಧಿಸೂಚನೆಯಂತೆ ಅಧಿನಿಯಮದಡಿ ಅಧಿಸೂಚಿಸಲ್ಪಟ್ಟ ದಿನಗೂಲಿ ನೌಕರರಿಗೆ ಮಾತ್ರ ಉಪಧನ ಪಾವತಿಗೆ ಅರ್ಹರಿರುತ್ತಾರೆಂದು ಆದೇಶಿಸಿರುವುದು ಸಮಂಜಸವೇ:<br><br>ಇ) ಈ ಆದೇಶದಿಂದ ಅಧಿಸೂಚಿಸಲ್ಪಟ್ಟ ನೌಕರರನ್ನು ಹೊರತುಪಡಿಸಿ ಈ ಹಿಂದೆ 25-30 ವರ್ಷಗಳ ಕಾಲ ಸೇವೆ ಸಲ್ಲಿಸಿ ನಿವೃತ್ತಿ ಅಥವಾ ಮರಣ ಹೊಂದಿದ ದಿನಗೂಲಿ ನೌಕರರು ಉಪಧನ ಪಾವತಿಯಿಂದ ವಂಚಿತರಾಗುವುದಿಲ್ಲವೇ; | ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 77 ಶಾಸನ 2012, ದಿನಾಂಕ: 15.02.2013ರಲ್ಲಿ ರಾಜ್ಯ ಸರ್ಕಾರವು ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ 2012ನ್ನು ಜಾರಿಗೊಳಿಸಿದ್ದು, ಈ ಅಧಿನಿಯಮದಡಿ ಅಧಿಸೂಚಿಸಲ್ಪಟ್ಟ ಅರ್ಹ ದಿನಗೂಲಿ ನೌಕರರಿಗೆ ಕೇಂದ್ರದ ಉಪಧನ ಪಾವತಿ ಕಾಯ್ದೆ 1972ರಂತೆ ಉಪಧನ ಸೌಲಭ್ಯವನ್ನು ರಾಜ್ಯ ಸರ್ಕಾರವು ದಿನಾಂಕ: 16.05.2019ರ ಅಧಿಸೂಚನೆಯಲ್ಲಿ ಮಂಜೂರು ಮಾಡಿರುತ್ತದೆ. ಮೇಲ್ಕಂಡ ಅಧಿನಿಯಮದಡಿ ಅಧಿಸೂಚಿಸಲ್ಪಟ್ಟ ದಿನಗೂಲಿ ನೌಕರರಿಗೆ ಈ ಉಪಧನ ಸೌಲಭ್ಯವು ಲಭ್ಯವಾಗಲಿದೆ.<br><br>ಉಪಧನ ಪಾವತಿ ಕಾಯ್ದೆ-1972 ರಂತೆ 5 ವರ್ಷ ಮೇಲ್ಪಟ್ಟು ಕಾರ್ಯನಿರ್ವಹಿಸಿ ನಿವೃತ್ತಿ ಅಥವಾ ಮರಣ ಹೊಂದಿದ ದಿನಗೂಲಿ ನೌಕರರಿಗೆ ಉಪಧನ ಪಾವತಿಯನ್ನು ಮಾಡಲು ಸರ್ಕಾರಿ ಸುತ್ತೋಲೆ ಸಂಖ್ಯೆ ಕಾಇ: 58 ಎಲ್‌ಡಬ್ಲೂಎ ದಿನಾಂಕ:13-10-2016ರಲ್ಲಿ ಈ ಕೆಳಕಂಡ ಸನ್ನಿವೇಶಗಳಲ್ಲಿ ಉಪಧನ ಪಡೆಯಲು ಅವಕಾಶವಿರುತ್ತದೆ.<br><br>1. ವಯೋನಿವೃತ್ತಿಯಾದಾಗ.<br>2. ನಿವೃತ್ತರಾದಾಗ ಅಥವಾ ರಾಜೀನಾಮೆ ನೀಡಿದ್ದಾಗ.<br>3. ಮೃತರಾದಾಗ ಅಥವಾ ಅಪಘಾತದಿಂದಾಗಿ/ ರೋಗದಿಂದಾಗಿ ವಿಕಲಚೇತರಾದಾಗ (ನೌಕರರು ಮೃತರಾದಾಗ ಅಥವಾ ವಿಕಲಚೇತನರಾದಾಗ ಐದು (05) ವರ್ಷಗಳ ಕನಿಷ್ಠ ಸೇವಾವಧಿಯಅವಶ್ಯಕತೆ |

| | |
|---|---|
| | ಇರುವುದಿಲ್ಲ. ಇವರು ಎಷ್ಟು ಅವಧಿಯ ಸೇವೆಯನ್ನು ಸಲ್ಲಿಸಿದ್ದಾರೆಯೋ ಆ ಅವಧಿಗೆ ಉಪಧನ ನೀಡಬೇಕಾಗುತ್ತದೆ. ನೌಕರರು ಮೃತರಾದಾಗ ಅವರು ನಾಮನಿರ್ದೇಶಿಸಿದ ವ್ಯಕ್ತಿಗೆ ಅಥವಾ ಅವರ ಶಾಸನಬದ್ಧ ವಾರಸುದಾರರಿಗೆ ಉಪಧನ ಸಂದಾಯ ಮಾಡತಕ್ಕದ್ದು). |
| ಈ) ಎರಡು ಇಲಾಖೆಗಳ ವಿಭಿನ್ನ ಆದೇಶಗಳಿಂದ ಉಪಧನ ಪಾವತಿ ಮಾಡಲು ಇಲಾಖೆಗಳು ಗೊಂದಲಕ್ಕೀಡಾಗುವುದಿಲ್ಲವೇ;' | ಇಲ್ಲ. |
| ಉ) ಹಾಗಿದ್ದಲ್ಲಿ ಉಪಧನ ಪಾವತಿ ಕಾಯ್ದೆ-1972 ರಂತೆ 5 ವರ್ಷ ಮೇಲ್ಪಟ್ಟು ಕಾರ್ಯನಿರ್ವಹಿಸಿ ನಿವೃತ್ತಿ ಅಥವಾ ಮರಣ ಹೊಂದಿದ ದಿನಗೂಲಿ ನೌಕರರಿಗೆ ಉಪಧನ ಪಾವತಿಯನ್ನು ಮಾಡಲು ಆದೇಶ ಹೊರಡಿಸಲು ಅಗತ್ಯ ಕ್ರಮಕೈಗೊಳ್ಳಲಾಗುವುದೇ? | ಉದ್ಭವಿಸುವುದಿಲ್ಲ. |

ಸಂಖ್ಯೆ: ಸಿಆಸುಇ 3 ಎಸ್‌ಎಲ್‌ಸಿ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ